ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತಮೂರನೆಯ ಅಧಿವೇಶನ

ಮಂಗಳವಾರ, ದಿನಾಂಕ: 2ನೇ ಫೆಬ್ರುವರಿ, 2021

ಗುಬ್ಬಿ ಪಟ್ಟಣದ ಮಾರನಕಟ್ಟೆ ಜಾಗದ ಬಗ್ಗೆ

ಶ್ರೀ ಕಾಂತರಾಜ್ (ಬಿ.ಎಂ.ಎಲ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ ):-

176(220) ಮಾನ್ಯ ಪೌರಾಡಳಿತ ಹಾಗೂ ರೇಷ್ಮೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ತುಮಕೂರು ಜಿಲ್ಲೆ, ಗುಬ್ಬಿ ಪಟ್ಟಣ ಪಂಚಾಯ್ತಿ ಹೊಂದಿರುವ ಜನಸಂಖ್ಯೆ ಎಷ್ಟು; ವಾರ್ಡುಗಳ ಸಂಖ್ಯೆ ಎಷ್ಟು ; ಪಟ್ಟಣ ಪಂಚಾಯ್ತಿಯ ಸರಹದ್ದು ಎಲ್ಲಿಯವರೆಗೆ ಇದೆ ; (ವಿವರವಾದ ಮಾಹಿತಿ ನೀಡುವುದು)

(ಆ) ಗುಬ್ಬಿ ಪಟ್ಟಣ ಪಂಚಾಯ್ತಿಯಲ್ಲಿ ಮಾರನಕಟ್ಟೆ ಕೆರೆ ಇದೆಯೇ; ಹಾಗಿದ್ದರೆ, ಇದರ ವಿಸ್ತೀರ್ಣವೆಷ್ಟು ; ಇದಕ್ಕೆ ಮಾಲೀಕರು ಯಾರು; (ವಿವರವಾದ ಮಾಹಿತಿ ನೀಡುವುದು)

(ಇ) ಸದರಿ ಮಾರನಕಟ್ಟೆ ಜಾಗವನ್ನು ಸರ್ಕಾರವು ಯಾವ ಯಾವ ಸಂಸ್ಥೆಗಳಿಗೆ ಗುತ್ತಿಗೆ/ ಕ್ರಯಕ್ಕೆ ನೀಡಲಾಗಿದೆ ; (ವಿವರವಾಗಿ ಸಂಸ್ಥೆಯ ಹೆಸರು, ಗುತ್ತಿಗೆ/ಕ್ರಯ ನೀಡಿದ ವರ್ಷ ಹಾಗೂ ವಿಸ್ತೀರ್ಣದೊಂದಿಗೆ ಸರ್ಕಾರಿ ಆದೇಶ ಪ್ರತಿಗಳೊಂದಿಗೆ ವಿವರವಾದ ಮಾಹಿತಿ ನೀಡುವುದು)

(ಈ) ಇದರಲ್ಲಿ ಖಾಲಿ ಉಳಿದಿರುವ ಜಾಗ ಎಷ್ಟು; ಇದನ್ನು ಸರ್ಕಾರ ಯಾವ ಉದ್ದೇಶಕ್ಕೆ ಬಳಸಲು ಚಿಂತಿಸಿದೆ ?